



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ


ಸಂಪುಟ: ೦೩ ಸಂಚಿಕೆ: ೩ Vol. 03 Issue 3 | ಜೂನ್ ೨೦೧೬ June 2016 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/– A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath





ಚಂದಾ ವಿವರಗಳು

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೪೮೭, ೨೬೭೬೬೭೭೩
ಇಮೇಲ್ : bmsritrust@gmail.com
web: www.bmshri.org


## ಹಳಗನ್ನಡ ಕಾವ್ಯಾಭ್ಯಾಸ ಶಿಬಿರ ಸಮಾರೋಪ ಸಮಾರಂಭ

ಪ್ರತಿಷ್ಠಾನ ಆಯೋಜಿಸಿದ್ದ ಹಳಗನ್ನಡ ಕಾವ್ಯಾಭ್ಯಾಸ ಶಿಬಿರದ ಸಮಾರೋಪ ಸಮಾರಂಭವು ದಿನಾಂಕ 10 ಮೇ 2016ರಂದು ಏರ್ಪಡಿಸಲಾಗಿತ್ತು.(ಈ ಶಿಬಿರವು **26ಫೆಬ್ರವರಿಯಿಂದ 10 ಮೇ 2016 ರವರೆಗೆ ನಡೆಯಿತು).** ಡಾ॥ ಎಸ್.ಎಲ್. ಮಂಜುನಾಥ್, ಕನ್ನಡ ವಿಭಾಗದ ಮುಖ್ಯಸ್ಥರು, ವಿಜಯ ಪದವಿ ಪೂರ್ವಕಾಲೇಜು, ಜಯನಗರ, ಬೆಂಗಳೂರು ಇವರು ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದರು. ಶಿಬಿರದ ಉಪನ್ಯಾಸಕರಾಗಿದ್ದ ಡಾ॥ ಕೆ.ಆರ್.ಗಣೇಶ ಅವರು ಸಮಾರಂಭದ ಅಧ್ಯಕ್ಷರಾಗಿ ಉಪಸ್ಥಿತರಿದ್ದರು.

ಸ್ವಾಗತ ಮತ್ತು ಪ್ರಾಸ್ತಾವಿಕ ನುಡಿಗಳನ್ನಾಡಿದ ಡಾ॥ ಪಿ.ವಿ. ನಾರಾಯಣ ಅವರು, ಲಾಗಾಯ್ತಿನಿಂದಲೂ ಪ್ರತಿಷ್ಠಾನದಲ್ಲಿ ಹಳಗನ್ನಡ ಕಾವ್ಯಾಭ್ಯಾಸ ಶಿಬಿರವನ್ನು ಆಯೋಜಿಸುತ್ತಿರುವ ವಿಷಯ ಮತ್ತು ಲಾಗಾಯ್ತಿನಿಂದಲೂ ಡಾ॥ ಗಣೇಶ ಅವರ ಶಿಬಿರದೊಂದಿಗಿನ ಒಡನಾಟವನ್ನು ನೆನಪಿಸಿಕೊಂಡರು. ಮುಖ್ಯ ಅತಿಥಿಗಳ ಪರಿಚಯವನ್ನು ಮತ್ತು ಅವರ ಸಾಧನೆಗಳನ್ನೂ ಸಭಿಕರಿಗೆ ತಿಳಿಸಿದರು. ವಿಶೇಷವಾಗಿ ವಿಜಯ ಕಾಲೇಜಿನಲ್ಲಿ ಅವರ ಪರಿಶ್ರಮದಿಂದ ಪ್ರಾರಂಭಗೊಂಡ ಐಚ್ಛಿಕ ಕನ್ನಡ ತರಗತಿಗಳನ್ನು, ಪಂಪನಿಂದ ಪ್ರಾರಂಭಮಾಡಿ ಆಧುನಿಕ ಬರಹಗಾರರ ಬಗ್ಗೆ ಆಯೋಜಿಸಿದ್ದ ಹಲವು ವಿಷಯಾಧಾರಿತ ವಿಚಾರ ಸಂಕಿರಣಗಳನ್ನು ಮತ್ತು ಇತರ ಚಟುವಟಿಕೆಗಳನ್ನು ತಿಳಿಸಿದರು.

ಡಾ॥ ಮಂಜುನಾಥ್ ಅವರು, ತಮ್ಮ ಕೆಲವು ಅನುಭವಗಳನ್ನು ಹಂಚಿಕೊಳ್ಳುತ್ತಾ, ಕೆಲವು ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಕೊರತೆಯಿಂದಾಗಿ ಕನ್ನಡ ಎಂ.ಎ.ಪದವಿ ತರಗತಿಗಳನ್ನು ನಿಲ್ಲಿಸಬೇಕಾದ ಪರಿಸ್ಥಿತಿಯು ನಿರ್ಮಾಣವಾಗಿದೆ. ಇಂತಹ ಸಂದರ್ಭದಲ್ಲಿ ಪ್ರತಿಷ್ಠಾನ ಲಾಗಾಯ್ತಿನಿಂದಲೂ ನಡೆಸಿಕೊಂಡು ಬರುತ್ತಿರುವ ಹಳಗನ್ನಡ ಕಾವ್ಯಾಭ್ಯಾಸ ತರಗತಿಗಳು ಮತ್ತು ತರಗತಿಗಳನ್ನು ನಡೆಸಿಕೊಡುತ್ತಿರುವ ಉಪನ್ಯಾಸಕರನ್ನು ಅಭಿನಂದಿಸಿದರು. ಇನ್ನು ಮುಂದೆ, ಈ ಶಿಬಿರಗಳಿಗೆ ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾರ್ಥಿಗಳೂ ಭಾಗವಹಿಸುವಂತಾಗಲಿ ಎಂದು ಆಶಯ ವ್ಯಕ್ತಪಡಿಸಿದರು.ವಿದ್ಯಾರ್ಥಿಗಳಿಗೆ ಪ್ರಮಾಣ ಪತ್ರಗಳನ್ನು ನೀಡಿದರು.

ತರಗತಿಗಳ ಬಗ್ಗೆ ಕೆಲವು ವಿದ್ಯಾರ್ಥಿಗಳು ತಮ್ಮ ಅನಿಸಿಕೆಗಳನ್ನೂ ಮತ್ತು ಅನುಭವವನ್ನೂ ಹಂಚಿಕೊಂಡರು.

ಸಮಾರೋಪ ಸಮಾರಂಭವು ಗೌರವ ಕಾರ್ಯದರ್ಶಿ ಪ್ರೊ॥ ಅಬ್ದುಲ್ ಬಷೀರ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು.



## ಸಂಪಾದಕೀಯ

ಹೊಂಗನಸು ಹೆಚ್ಚು ಆಕರ್ಷಕವಾಗಿ ವರ್ಣಮಯವಾಗಿದ್ದರೂ ಹಾಗೂ ಅದನ್ನು ಮುದ್ರಿಸುವ ವೆಚ್ಚ ಹೆಚ್ಚಾಗಿದ್ದರೂ ಚಂದಾ ದರವನ್ನು ಹೆಚ್ಚಿಸಿರುವುದಿಲ್ಲ. ಎಲ್ಲಾ ಓದುಗರೂ ಹೊಂಗನಸು ಪತ್ರಿಕೆಯ ಚಂದಾದಾರರಾಗಬೇಕೆಂದು ನಮ್ಮ ಆಶಯವಾಗಿದೆ.ಈಗಾಗಲೇ ಅರ್ಧಕ್ಕೂ ಹೆಚ್ಚು ಸದಸ್ಯರು ಚಂದಾದಾರರಾಗಿರುತ್ತರೆ. ಉಳಿದ ಸದಸ್ಯರೂ ಆದಷ್ಟೂ ಬೇಗನೆ ಚಂದಾದಾರರಾಗಬೇಕೆಂದು ಕೋರುತ್ತೇವೆ. ಜೊತೆಗೆ ನಿಮ್ಮ ಬಂಧು ಮಿತ್ರರೂ ಹಾಗೂ ಇತರ ಸಾಹಿತ್ಯಸಕ್ತರೂ ಚಂದಾದಾರರಾದಲ್ಲಿ ಇನ್ನೂ ಹೆಚ್ಚಿನ ಪ್ರತಿಗಳನ್ನು ಮುದ್ರಿಸಲು ಸಹಕಾರಿಯಾಗುತ್ತದೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಲಿಫ್ಟ್ ಅಳವಡಿಸುವ ಕಾರ್ಯ ಭರದಿಂದ ಸಾಗುತ್ತಿದೆ. ಶೀಘ್ರದಲ್ಲಿಯೇ ಈ ಸೌಲಭ್ಯ ಲಭ್ಯವಾಗುತ್ತದೆ. ಈ ಕಾರಣದಿಂದ ಸಧ್ಯದಲ್ಲಿ ವಾಚನಾಲಯವನ್ನು ನಡೆಸಲಾಗುತ್ತಿಲ್ಲ. ಮಾನ್ಯ ಸದಸ್ಯರು ಸಹಕರಿಸಬೇಕೆಂದು ಕೋರುತ್ತೇವೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಎಂವೀಸೀ ಸಭಾಂಗಣದಲ್ಲಿ ಹವಾನಿಯಂತ್ರಣ ಸೌಲಭ್ಯ ಒದಗಿಸುವ ನಮ್ಮ ಯೋಜನೆಯನ್ನು ಕೈಗೊಳ್ಳುವ ಚಿಂತನೆ ನಡೆಯುತ್ತಿದೆ. ಈ ನಿಟ್ಟಿನಲ್ಲಿ ಸದಸ್ಯರು ಉದಾರವಾಗಿ ಸಹಾಯ ಮಾಡಬೇಕೆಂದು ಸದಸ್ಯರನ್ನು ಈ ಮೂಲಕ ಕೋರುತ್ತೇವೆ.

ನಿಮ್ಮ ಸಹಕಾರವನ್ನು ಎದುರು ನೋಡುತ್ತಿದ್ದೇವೆ.

**ಬಿಆರ್ ರವೀಂದ್ರನಾಥ್**
ಸಂಪಾದಕರು

### ಜೂನ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಮಾಸ್ತಿ ವೆಂಕಟೇಶ ಐಯ್ಯಂಗಾರ್ | 6–6–1891 |
| ಎ ಎನ್ ಮೂರ್ತಿರಾವ್ | 16–6–1900 |
| ಸೆಡಿಯಾಪು ಕೃಷ್ಣಭಟ್ಟ | 8–6–1902 |
| ತ.ಸು. ಶಾಮರಾಯರು | 12–6–1906 |
| ಜಯದೇವಿ ತಾಯಿ ಲಿಗಾಡೆ | 23–6–1912 |
| ಸಿದ್ದಯ್ಯ ಪುರಾಣಿಕ | 18–6–1918 |
| ನಿರಂಜನ | 15–6–1929 |

### ಜೂನ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಬಿ. ವೆಂಕಟಾಚಾರ್ಯ | 26–6–1914 |
| ಫ.ಗು. ಹಳಕಟ್ಟಿ | 29–6–64 |
| ಮಾಸ್ತಿ ವೆಂಕಟೇಶ ಐಯ್ಯಂಗಾರ್ | 6–6–1986 |
| ಡಿ. ಆರ್. ನಾಗರಾಜ್ | 12–6–1998 |

## ಆಧುನಿಕ ವಚನಗಳು

**–ಜಿ. ಅಬ್ದುಲ್ ಬಷೀರ್**

ಪಕ್ಷದ ವತಿಯಿಂದ ಚುನಾವಣೆ ಗೆಲ್ಲುವರು
ಮಂತ್ರಿ ಪದವಿಗಾಗಿ ರಂಪಾಟ ಮಾಡುವರು
ಅಧಿಕಾರದ ರುಚಿ ಅನುಭವಿಸುವರು
ಭ್ರಷ್ಟಾಚಾರಕ್ಕೆ ಸಿಲುಕಿ ಮಂತ್ರಿ ಪದವಿ ಕಳೆದುಕೊಂಡಾಗ
ಶಾಸಕ ಸ್ಥಾನಕ್ಕೆ ರಾಜಿನಾಮೆ ನೀಡುವರು
ಮತ್ತೊಂದು ಉಪಚುನಾವಣೆಯ ಆಟ ಆಡುವರು
ಮತದಾರರಿಗೆ ಮಂಕುಬೂದಿ ಎರಚುವರು
ರಾಜಕೀಯ ಲಾಭದ ಆಟ ಆಡುವರಿಗೆ
ಸದ್ಬುದ್ಧಿಯ ಪಾಲಿಸೋ 'ಅಲ್ಲಾರಖಾ' ॥7॥

## ಪ್ರಕಟಣೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿತವಾಗಿರುವ 'ಗೋವಿಂದ ಜಾಲಿಹಾಳ ದತ್ತಿ' ಕಾರ್ಯಕ್ರಮದ ಅಂಗವಾಗಿ ಇದೇ ಜೂನ್ 19ರಂದು ಭಾನುವಾರ 13ರಿಂದ 18 ವರ್ಷಗಳು ನಡುವಣ ಯುವಜನತೆಗಾಗಿ 'ಭಕ್ತಿಗೀತೆ ಗಾಯನ' ಸ್ಪರ್ಧೆಯನ್ನು ಪ್ರತಿಷ್ಠಾನದಲ್ಲಿ ನಡೆಸಲಾಗುವುದು. ಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನಗಳನ್ನೂ ಪ್ರಶಸ್ತಿ ಪತ್ರಗಳನ್ನೂ ನೀಡಲಾಗುವುದು. ಸ್ಪರ್ಧೆಯು ಅಂದು ಬೆಳಿಗ್ಗೆ 10–00ಗಂಟೆಗೆ ಆರಂಭವಾಗುತ್ತದೆ. ಅನಂತರ ಬಹುಮಾನ ವಿತರಣೆ ನಡೆಯುತ್ತದೆ. ಆಸಕ್ತರು ಹುಟ್ಟಿದ ತಾರೀಕಿನ ಬಗೆಗಿನ ದಾಖಲೆಯೊಡನೆ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಬಹುದು. ಪ್ರವೇಶ ಶುಲ್ಕವಿಲ್ಲ. ಹೆಚ್ಚಿನ ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಬಹುದು.

ದೂರವಾಣಿಸಂಖ್ಯೆ– 26615877, 26676773

## ಬಿಎಂಶ್ರೀ ಕಲಾ ಭವನ

150 ಜನರಿಗೆ ಸ್ಥಳಾವಕಾಶ ಧ್ವನಿ, ಬೆಳಕು, ಪ್ರೊಜೆಕ್ಟರ್ ಸೌಲಭ್ಯಗಳು ಇರುವ ಬಿಎಂಶ್ರೀ ಕಲಾ ಭವನ ಸಾಹಿತ್ಯ –ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಲಭ್ಯವಿದೆ.ಉಪನ್ಯಾಸ, ವಿಚಾರಗೋಷ್ಠಿ, ಪುಸ್ತಕ ಬಿಡುಗಡೆ, ಕವಿಗೋಷ್ಠಿ, ಸಭೆ, ಸಂವಾದ, ಸಂಗೀತ, ನೃತ್ಯ, ಮುಂತಾದ ವೈವಿಧ್ಯಮಯ ಕಾರ್ಯಕ್ರಮಗಳಿಗೆ ಸಾಹಿತ್ಯಾಸಕ್ತರು, ಸಂಘ ಸಂಸ್ಥೆಗಳು ಪಡೆಯುಬಹುದು. ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿ.

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ
### www.bmshri.org

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣವನ್ನು ಪುನರ್ ರೂಪಿಸಲಾಗಿರುತ್ತದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ ವಿಶ್ವದಾದ್ಯಂತ ಕನ್ನಡ ಅಧ್ಯಯನ ಮಾಡುವ ಎಲ್ಲರಿಗೂ ಉತ್ತಮ ಸಂಪನ್ಮೂಲಗಳ ಕಣಜವಾಗುವಂತೆ ಮಾಡಲು ವಿಶೇಷ ಶ್ರಮ ವಹಿಸಲಾಗುತ್ತಿದೆ. ಶೀಘ್ರದಲ್ಲಿ ಹಲವಾರು ನೂತನ ಶೈಲಿಯ ಸೌಲಭ್ಯಗಳನ್ನು ಈ ಜಾಲತಾಣದಲ್ಲಿ ಕಾಣಬಹುದು. ನಿಮ್ಮ ಸಲಹೆ ಸೂಚನೆಗಳಿಗೆ ಸ್ವಾಗತ

**ಪ್ರತಿಷ್ಠಾನವು ಓಲೆಗರಿಗಳ ಮತ್ತು ಕಾಗದ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ದಾಖಲೀಕರಣದ ಕಾರ್ಯವನ್ನು ನಿರ್ವಹಿಸುತ್ತಿದೆ. ಆಸಕ್ತರು ಹಸ್ತಪ್ರತಿ ವಿಭಾಗವನ್ನು ಸಂಪರ್ಕಿಸಬೇಕೆಂದು ಕೋರುತ್ತೇವೆ.**

# ಜೂನ್ 2016 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**01–6–2016 ಬುಧವಾರ ಸಂಜೆ 6 ಗಂಟೆಗೆ**

ಗಮಕವಾಹಿನಿ–5

'ಪಂಪಭಾರತ' ದ 'ದುರ್ಯೋಧನ ಅವಸಾನ'

ಕುಮಾರಿಯರಾದ ಅಮೃತ, ರಕ್ಷಿತ ಕೆ., ರಕ್ಷಿತ, ದ್ಯುತಿ, ಶಾರ್ವರಿ, ಋತಿಕಾ.

**5–6–2016 ಭಾನುವಾರ ಬೆಳಿಗ್ಗೆ 10.30 ಗಂಟೆಗೆ**

**ಮಾಸ್ತಿ ನೆನಪು–ಚಲನಚಿತ್ರ ಪ್ರದರ್ಶನ ಹಾಗೂ ಚರ್ಚೆ**

ಮುಖ್ಯ ಅತಿಥಿ : ಶ್ರೀ ಪಿ. ಶೇಷಾದ್ರಿ, ಖ್ಯಾತ ಚಲನಚಿತ್ರ ನಿರ್ದೇಶಕರು





**8–6–2016 ಬುಧವಾರ ಸಂಜೆ 6 ಗಂಟೆಗೆ**

ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ಸಾಕ್ಷ್ಯ ಚಿತ್ರಗಳ ಪ್ರದರ್ಶನ

**13–6–2016 ಸೋಮವಾರ ಸಂಜೆ 6 ಗಂಟೆಗೆ**

'ಅಕ್ಕರಗೊಟ್ಟಿ'

ವಿಷಯ: ಕನ್ನಡದಲ್ಲಿ ಪ್ರಥಮಾ ವಿಭಕ್ತಿ :ಕೆಲವು ಹೊಸಅಂಶಗಳು

ಚಾಲನೆ : ಪ್ರೊ॥ ಕೆ.ಎಸ್. ಮಧುಸೂದನ

**16–6–2016 ಗುರುವಾರ ಸಂಜೆ 6 ಗಂಟೆಗೆ**

ವಚನ ವಿಹಾರ

ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ





**19–06–2016 ಭಾನುವಾರ ಬೆಳಗ್ಗೆ 10–00**

**'ಗೋವಿಂದ ಜಾಲಿಹಾಳ್ ದತ್ತಿ'**

ಭಕ್ತಿಗೀತೆಗಳ ಸ್ಪರ್ಧೆ.

**25.06.2016 ಶನಿವಾರ ಸಂಜೆ : 6.00**

ಜಯಲಕ್ಷ್ಮಮ್ಮ ಬಾಪು ರಾಮಣ್ಣ ದತ್ತಿ

ಸಂಗೀತ ಕಾರ್ಯಕ್ರಮ – ಕುಮಾರಿ ಅಪೂರ್ವ ಹಾಗೂ ಸಂಗಡಿಗರು



## ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಎಲ್ಲಾ ಸದಸ್ಯರ ವಿಳಾಸಗಳನ್ನು ಖಚಿತಪಡಿಸಿಕೊಂಡು ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ಪರಿಷ್ಕೃತ ವಿಳಾಸ ಮಾಹಿತಿಗಳನ್ನು ಡಿಜಿಟಲೀಕರಿಸುವ ಕೆಲಸವನ್ನು ಪ್ರಾರಂಭ ಮಾಡಿರುತ್ತದೆ. ಇದರಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಹೆಚ್ಚಿನ ದಕ್ಷತೆ ಹಾಗೂ ಮಿತವ್ಯಯ ಸಾಧಿಸಲು ಸಾಧ್ಯವಾಗುತ್ತದೆ. ಪ್ರತಿಷ್ಠಾನದ ಎಲ್ಲಾ ಸದಸ್ಯರೂ ತಮ್ಮ ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ವಿಳಾಸಗಳನ್ನು ಪ್ರತಿಷ್ಠಾನದ ಕಚೇರಿಗೆ ಈ ಕೆಳಕಂಡ ಯಾವುದೇ ರೀತಿಯಲ್ಲಿ ತಲುಪಿಸಬೇಕೆಂದು ಕೋರುತ್ತೇವೆ:

1. ಒಂದು ಪೋಸ್ಟ್ ಕಾರ್ಡ್‌ನಲ್ಲಿ ಎಲ್ಲಾ ವಿವರಗಳನ್ನು ಬರೆದು ಕಳುಹಿಸುವುದು
2. ಪ್ರತಿಷ್ಠಾನದ ಈ ಮೈಲ್ ವಿಳಾಸಕ್ಕೆ ಎಲ್ಲಾ ವಿವರಗಳನ್ನು ಕಳುಹಿಸುವುದು bmsritrust@gmail.com
3. ಪ್ರತಿಷ್ಠಾನದ ಕಚೇರಿಗೆ ದೂರವಾಣಿ ಕರೆ ಮಾಡಿ ವಿವರಗಳನ್ನು ನೀಡುವುದು 080 26615877
4. ಪ್ರತಿಷ್ಠಾನದ ಕಚೇರಿಗೆ ಭೇಟಿ ನೀಡಿದಾಗ ವಿವರಗಳನ್ನು ನೀಡುವುದು

ದಯವಿಟ್ಟು ಗಮನಿಸಿ: ಹಾಲಿ ನಿಯಮಗಳ ಪ್ರಕಾರ ಸದಸ್ಯತ್ವ ಗುರುತಿನ ಕಾರ್ಡ್ ಇಲ್ಲದೇ ಪ್ರತಿಷ್ಠಾನದ ಸರ್ವ ಸದಸ್ಯರ ಸಭೆಯ ಕಲಾಪಗಳಲ್ಲಿ ಭಾಗವಹಿಸಲು ಅನುಮತಿ ಇರುವುದಿಲ್ಲ. ಆದ್ದರಿಂದ ಪ್ರತಿಷ್ಠಾನದ ಸದಸ್ಯತ್ವದ ಗುರುತಿನ ಕಾರ್ಡ್‌ನ್ನು ಪಡೆಯದಿರುವಂತಹ ಸದಸ್ಯರು ಶೀಘ್ರವಾಗಿ ಪಡೆದುಕೊಳ್ಳಬೇಕೆಂದು ಕೋರಲಾಗಿದೆ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಮಾರ್ಚ್2016–ಏಪ್ರಿಲ್2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ಗಮಕ ವಾಹಿನಿ ಕಾರ್ಯಕ್ರಮ ಮಾಲೆ




ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು, ಶ್ರೀ ವಾಗ್ದೇವಿ ಗಮಕಕಲಾ ಪ್ರತಿಷ್ಠಾನದ ಸಹಯೋದೊಂದಿಗೆ ಪ್ರತಿ ತಿಂಗಳ ಗಮಕವಾಹಿನಿ ಕಾರ್ಯಕ್ರಮವಾಗಿ, ದಿನಾಂಕ 4ನೇ ಮೇ 2016 ರಂದು ಸಂಜೆ 6ಘಂಟೆಗೆ ಕುಮಾರವ್ಯಾಸ ಭಾರತದ ವಿರಾಟಪರ್ವದಲ್ಲಿನ "ಉತ್ತರ ಪೌರುಷ" ವೆಂಬ ಕಥಾ ಪ್ರಸಂಗನ್ನು ಆಯೋಜಿಸಿತ್ತು. ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ವಿದ್ಯಾರ್ಥಿಗಳಾದ ಶ್ರೀಯುತ ರಜತ್–(ವಾಚನ) ಮತ್ತು ಕುಮಾರಿ ಸ್ನಿಗ್ಧ–(ವ್ಯಾಖ್ಯಾನ) ಅವರು ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ಪಿ.ವಿ.ನಾರಾಯಣ ಅವರು ವಿದ್ಯಾರ್ಥಿಗಳನ್ನು ಅಭಿನಂದಿಸಿದರು. ವಿಜಯ ಕಾಲೇಜು, ಜಯನಗರ, ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ॥ ಎಸ್.ಎಲ್. ಮಂಜುನಾಥ್ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಪ್ರೊ.ಅಬ್ದುಲ್ ಬಷೀರ್, ಕಾರ್ಯದರ್ಶಿಗಳು ಎಲ್ಲರಿಗೂ ಸ್ವಾಗತಕೋರಿದರು.

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ** – ಸಾಕ್ಷ್ಯ ಚಿತ್ರಗಳ ಪ್ರದರ್ಶನದಲ್ಲಿ 06–05–2016ರಂದು

ಕರ್ನಾಟಕದ ನದಿಗಳು ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಈ ಸಾಕ್ಷ್ಯ ಚಿತ್ರಗಳು ಬಹಳ ಉಪಯುಕ್ತವಾಗಿದ್ದವು.

## ಅಕ್ಕರಗೊಟ್ಟಿ



ದಿನಾಂಕ 12ನೇ ಮೇ 2016 ರಂದು ನಡೆದ ಅಕ್ಕರಗೊಟ್ಟಿ ಕಾರ್ಯಕ್ರಮದಲ್ಲಿ, ಡಾ॥ ಕೆ.ಆರ್. ಗಣೇಶ್ ಅವರು 1) ಸವತಿ ಗಂಧವಾರಣ ಮತ್ತು 2) ಶನಿವಾರಸಿದ್ಧಿ ಎಂಬ ಎರಡು ಶಾಸನೋಕ್ತ ಬಿರುದಾವಳಿಗಳ ಬಗ್ಗೆ ಕುರಿತು ಚಿಂತನೆ ಮತ್ತು ಪ್ರಸ್ತುತದಲ್ಲಿ ಕಂಡುಕೊಂಡಿರುವ ಅರ್ಥಗಳ ಹೊರತಾಗಿ, ಬೇರೇನಾದರೂ ಅರ್ಥೈಸುವ ಸಾಧ್ಯತೆಗಳಿವೆಯೇ ಎಂಬ ಚರ್ಚೆಗೆ ಚಾಲನೆ ನೀಡಿದರು. ಈ ಕಾರ್ಯಕ್ರಮದಲ್ಲಿ ಕೆಲವು ಇತಿಹಾಸಕ್ತರು ಪಾಲ್ಗೊಂಡಿದ್ದುದು ವಿಶೇಷವಾಗಿತ್ತು.

ಮೇಲಿನ ಎರಡೂ ಬಿರುದುಗಳು ರಾಜಮನೆತನಕ್ಕೆ ಸಂಬಂಧಿಸಿದ್ದು ಅವು ತಲೆಮಾರಿನಿಂದ ಧರಿಸಿಕೊಂಡು ಬಂದಿರುವ ಬಿರುದುಗಳೇ ಹೊರತು ಬೇರೆ ರೀತಿಯಾಗಿ ಇದುವರೆಗೂ ಅರ್ಥೈಸಿರುವುದಿಲ್ಲವೆಂಬ ಅಂಶವನ್ನು ವಿವರಿಸಿದರು.

1)ಸವತಿ ಗಂಧವಾರಣ : ಸಾಮಾನ್ಯವಾಗಿ ಈ ಬಿರುದು ಹೊಯ್ಸಳ ಪಟ್ಟ ಮಹಾದೇವಿ ಶಾನ್ತಲದೇವಿಗೆ ಮತ್ತು ಹೊಯ್ಸಳರ ಇತರ ರಾಣಿಯರಾದ ಕೇತಲದೇವಿ, ಬೊಮ್ಮಲದೇವಿಯರಿಗೂ, ಚಾಲುಕ್ಯರಾಣಿಯಾದ ಮೈಲಲದೇವಿಗೂ ಅನ್ವಯವಾಗಿರುವುದನ್ನು ಶಾಸನ ಪಾಠಗಳಲ್ಲಿ ಕಾಣಬಹುದು. ಸವತಿಯರ ಸೊಕ್ಕನ್ನು ಅಡಗಿಸುವವಳು ಎಂಬ ಅರ್ಥವನ್ನು ನಿಘಂಟುಗಳಲ್ಲಿ ಕಂಡರೂ, ಈ ಬಿರುದಿಗೆ ಪ್ರಾಯಶ ಆ ಅರ್ಥವಿರಲಿಲ್ಲ, ಸವತಿಯರಿಗೂ ಪ್ರಿಯವಾದ ಮದ್ದಾನೆ ಎಂಬ ಅರ್ಥಸರಿಯಾದುದು.

ಶಾಂತಲದೇವಿ, ತನ್ನ ಸವತಿಯರ ನಡುವೆಯೂ ಪ್ರೀತಿಯ ರಾಣಿಯಾಗಿ ಎಲ್ಲರಿಗೂ ಪ್ರೀತಿ ಪಾತ್ರಳಾಗಿ ಮೆಚ್ಚುಗೆಗಳಿಸಿದ್ದರಿಂದ, ಅವಳಲ್ಲಿ ಸವತಿಯ ಮಾತ್ಸರ್ಯವು ಕಿಂಚಿತ್ತೂ ಇಲ್ಲದ್ದರಿಂದ, ಅವಳ ಗುಣವನ್ನು ವೈಭವೀಕರಿಸುವ ಈ ಬಿರುದು ಅವಳಿಗೆ ಸೂಕ್ತವಾಗಿದೆಯೆಂಬ ಅಭಿಪ್ರಾಯವೇ ಬಹುಮತವಾಗಿತ್ತು. ಡಾ॥ದೇವರ ಕೊಂಡಾರೆಡ್ಡಿಯವರ ಅಭಿಪ್ರಾಯವು ಹೀಗಿತ್ತು: ಎಲ್ಲಾ ರಾಣಿಯರು ಶಾಂತಲೆಯನ್ನು ಬಹಳ ಪ್ರೀತಿ, ಆದರಗಳಿಂದ ಕಾಣುತ್ತಿದ್ದರು. ಆದ್ದರಿಂದ ಶಾಂತಲೆಯು ಸವತಿಯರ ಸೊಕ್ಕು, ಮದ, ಮಾತ್ಸರ್ಯಗಳನ್ನು ಕಾಣದವಳಾಗಿದ್ದಳು. ಆದ್ದರಿಂದ ಈ ಬಿರುದು ಅವಳ ಗುಣ ಮತ್ತು ನಡತೆಗೆ ಒಪ್ಪುವಹಾಗಿತ್ತು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

2)ಶನಿವಾರ ಸಿದ್ಧಿ : ಈ ವಾಕ್ಯವು ಶಿಲಾಹಾರರ ಶಾಸನಗಳಲ್ಲಿ ಮೊದಲಿಗೆ ಕಂಡು ಬಂದು ನಂತರ ಹೊಯ್ಸಳರ ಶಾಸನಗಳಲ್ಲಿ ಯಥಾವತ್ತಾಗಿ ಕಂಡು ಬರುವುದನ್ನು ಗಮನಿಸಬಹುದು.

ಶನಿಯು ಅಧಿಪತಿಯಾಗಿರುವ ಶನಿವಾರದಂದು ಲಾಗಾಯ್ತಿನಿಂದಲೂ ಶುಭಕಾರ್ಯಗಳನ್ನು ಕೈಗೊಳ್ಳದೆಯಿರುವುದು ಒಂದು ಅಲಿಖಿತ ಶಾಸನವೆಂದೇ ಹೇಳಬಹುದು. ಶನಿವಾರದಂದು ಅಂತಹ ಕಾರ್ಯ ಕೈಗೊಂಡಿರುವ ಸಂದರ್ಭಗಳಲ್ಲಿ ಶಾಸನೋಕ್ತವಾಗಿ ಶನಿವಾರವೆಂದು ಹೇಳದೆ (ಅಮಂಗಳವೆಂಬ ಭಾವನೆಯಿಂದ) ವಡ್ಡವಾರವೆಂದು ಪರ್ಯಾಯವಾಗಿ ಸೂಚಿತವಾಗಿರುವ ಸಾಕಷ್ಟು ಉದಾಹರಣೆಗಳುಂಟು. ರನ್ನನ ಗಧಾಯುದ್ಧದಲ್ಲೂ (ಆಶ್ವಾಸ 2– ಪದ್ಯ



ಈ ವರ್ಷದ ಸೂವೆಂ ಅರಗ ವಿಮರ್ಶಾ ಪ್ರಶಸ್ತಿ ಪ್ರೊ. ಕರೀಗೌಡ ಬೀಚನಹಳ್ಳಿ ಅವರಿಗೆ ಸಂದಿರುತ್ತದೆ. ಪ್ರಶಸ್ತಿಯನ್ನು ಪ್ರಸಿದ್ಧ ವಿಮರ್ಶಕ ಶ್ರಿ ಎಸ್. ಆರ್. ವಿಜಯಶಂಕರ್ ಅವರು ದಿನಾಂಕ 27ನೇ ಮೇ 2016 ಪ್ರದಾನ ಮಾಡಿರುತ್ತಾರೆ. ಈ ಸಂಬಂಧದಲ್ಲಿ ಪ್ರೊ. ಸೂವೆಂ ಅರಗ ಹಾಗೂ ಪ್ರೊ. ಕರಿಗೌಡ ಬೀಚನಹಳ್ಳಿ ಅವರ ಕಿರುಪರಿಚಯವನ್ನು ಇಲ್ಲ ನೀಡಲಾಗಿದೆ. ಕಾರ್ಯಕ್ರಮದ ವಿವರವನ್ನು ಜುಲೈ ತಿಂಗಳ ಹೊಂಗನಸು ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತದೆ.

## ಪ್ರೊ॥ ಸೂ.ವೆಂ. ಆರಗ ದತ್ತಿ – ಕಿರುಪರಿಚಯ



1930ರ ಜುಲೈ 2 ರಂದು ಶಿವಮೊಗ್ಗ ಜಿಲ್ಲೆಯ ಆರಗದಲ್ಲಿ ಹುಟ್ಟಿದ ಪ್ರೊ॥ ಆ.ಸೂ. ವೆಂಕಟರಾಮಯ್ಯನವರು ಗೋಣಿಬೀಡು, ಚಿಕ್ಕಮಗಳೂರು ಹಾಗೂ ಮೈಸೂರುಗಳಲ್ಲಿ ವಿದ್ಯಾಭ್ಯಾಸ ಮಾಡಿ, ಕನ್ನಡ ಎಂ.ಎ. ಪದವಿಯನ್ನು ಪಡೆದು 1953 ರಿಂದ 1988ರ ವರೆಗೆ ಬೆಂಗಳೂರಿನ ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದರು. ತಮ್ಮ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಕಟ್ಟಿ, ವಿದ್ಯಾರ್ಥಿಗಳಿಗಾಗಿ ಸಾಹಿತ್ಯ ಸ್ಪರ್ಧೆಗಳನ್ನು ನಡೆಸಿದರು. ಅತ್ಯಂತ ಪ್ರಬುದ್ಧ ಸಾಹಿತ್ಯ ವಿದ್ಯಾರ್ಥಿಯಾಗಿದ್ದ ಪ್ರೊ॥ ಆರಗ ಅವರು ತಮ್ಮ ಜೀವಿತ ಕಾಲದಲ್ಲಿ ಹೆಚ್ಚೇನೂ ಪ್ರಕಟಿಸಲಿಲ್ಲ; ಆದರೆ ಅವರ ನಿಧನದ ನಂತರ ಅವರ ಮೂರು ಕೃತಿಗಳು–

'ವಿಫಲ ಯಾತ್ರೆ' (ಸಣ್ಣ ಕತೆಗಳು),

'ಕುಸುಮ ಸಂಕೋಲೆ' (ಕಾದಂಬರಿ) ಹಾಗೂ

'ಬರಹದಸುತ್ತಮುತ್ತ' – ಪ್ರಕಟವಾಗಿವೆ; ಅವರ

ಸೃಜನಶೀಲ ಹಾಗೂ ವಿಮರ್ಶಾ ಸಾಮರ್ಥ್ಯಗಳಿಗೆ ಸಾಕ್ಷಿಯಾಗಿವೆ. 2012ರ ಮೇ 6 ರಂದು ತಮ್ಮ 82ನೇ ವಯಸ್ಸಿನಲ್ಲಿ ನಿಧನರಾದ ಅವರ ನೆನಪಿಗಾಗಿ ಅವರ ಮಕ್ಕಳು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿ 'ಸೂ.ವೆಂ. ಆರಗ ವಿಮರ್ಶಾ ದತ್ತಿಯನ್ನು' ಸ್ಥಾಪಿಸಿದ್ದಾರೆ. ಪ್ರತಿ ವರ್ಷ ಪ್ರಕಟವಾಗುವ ಅತ್ಯಂತ ಶ್ರೇಷ್ಠ ವಿಮರ್ಶಾ ಕೃತಿಗೆ ಈ ಪ್ರಶಸ್ತಿ ಸಲ್ಲುತ್ತದೆ,

## ಅಭಿನಂದನೆಗಳು



ಡಾ॥ ಕರೀಗೌಡ ಬೀಚನಹಳ್ಳಿ ಪುರಸ್ಕೃತ ಕೃತಿ : "ಬಸವಣ್ಣ ಪುನರ್ಲೇಖ ಕರೀಗೌಡರು ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಬೀಚನಹಳ್ಳಿಯಲ್ಲಿ 10–9–1951ರಲ್ಲಿ ಜನಿಸಿದರು.

1976ರಲ್ಲಿ ಕನ್ನಡ ಎಂ.ಎ., ಪದವಿಯಲ್ಲಿ 3ನೇ ರ್‍ಯಾಂಕ್ ಪಡೆದ ಕರೀಗೌಡರಿಗೆ, ಪ್ರೊ.ಬಿ.ಎಂ.ಶ್ರೀ. ಚಿನ್ನದ ಪದಕವೂ ದೊರಕಿತ್ತು. ಡಾ॥ ಕೆ.ವಿ. ನಾರಾಯಣ ಅವರ ಮಾರ್ಗದರ್ಶನದಲ್ಲಿ "ಕನ್ನಡ ಸಣ್ಣಕಥೆಗಳ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಅಧ್ಯಯನ" ವಿಷಯದ ಮೇಲೆ 1989ರಲ್ಲಿ ಪಿಎಚ್.ಡಿ.ಪದವಿ ಪಡೆದರು. ನಂತರ ಇದೇ ಕೃತಿ "ವ್ಯಷ್ಟಿ ಸಮಷ್ಟಿ" ಎಂಬ ಹೆಸರಿನಿಂದ, ಕನ್ನಡ ಸಣ್ಣ ಕಥೆಗಳ ಅಧ್ಯಯನ ಕ್ಷೇತ್ರದಲ್ಲಿ ಬಹಳ ಮಾನ್ಯತೆ ಪಡೆದು, ಇಂದಿಗೂ ಯುವ ಸಂಶೋಧಕರಿಗೆ ಮಾದರಿ ಅಧ್ಯಯನ ಕೃತಿಯಾಗಿ ಪರಿಗಣಿಸಿದೆ.

ಕರೀಗೌಡರು 37 ವರ್ಷಗಳ ದೀರ್ಘ ಅವಧಿಯನ್ನು ಬೆಂಗಳೂರು, ತುಮಕೂರು ಹಾಗೂ ಹಂಪಿ ವಿಶ್ವವಿದ್ಯಾಲಯಗಳಲ್ಲಿ ವಿವಿಧ ಆಯಾಮಗಳಲ್ಲಿ ಕಾರ್ಯನಿರ್ವಹಿಸಿದ ಅನುಭವವಿದೆ.ದೆಹಲಿಯ ಯುಜಿಸಿ ಸಂಸ್ಥೆಯು ಇವರನ್ನು ಹಂಪಿ ವಿಶ್ವವಿದ್ಯಾಲಯದ ಎಮಿರಿಟಸ್ ಪ್ರಾಧ್ಯಾಪಕರಾಗಿ ಆಯ್ಕೆ ಮಾಡಿದೆ. ಇವರ ಬರಹಗಳು ಕಥಾ ಸಾಹಿತ್ಯ, ಅಧ್ಯಯನ ಮತ್ತು ಸಂಪಾದಿತ ಕೃತಿಗಳನ್ನೊಳಗೊಂಡಿವೆ. ಪ್ರಸ್ತುತ ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿಯು ಇವರ "ಬಸವಣ್ಣ ಪುನರ್ಲೇಖ" ಕೃತಿಗೆ ಲಭ್ಯವಾಗುತ್ತಿದೆ. ಇವರಿಗೆ ನಮ್ಮೆಲ್ಲರ ಹಾರ್ದಿಕ ಅಭಿನಂದನೆಗಳು

---

26) "ವಡ್ಡವಾರ ಮೆಂಬಂತೆ ವಲಂ" ಎಂದಿದೆ. ಇಂತಾಗಿಯೂ ಬಲ್ಲಾಳದೇವನು ಶನಿವಾರದಂದೆ ಪಾಂಡ್ಯನನ್ನು ಸೋಲಿಸಿದ ಕಾರಣ, ಶನಿವಾರ ಸಿದ್ದಿಯೆಂಬ ಬಿರುದನ್ನು ಧರಿಸಿದ್ದಾನೆ, ಎಂದು 12ನೇ ಶತಮಾನದ ಬೇಲೂರಿನ ಒಂದು ಶಾಸನವು ಹೇಳುತ್ತದೆ. ಶನಿವಾರದಂದೇ ಲಭಿಸಿರುವ ಕೆಲವು ಸೂರ್ಯಗ್ರಹಣ ಮತ್ತು ವ್ಯತೀಪಾತ ದಿನಗಳಲ್ಲಿ ದಾನ, ಧರ್ಮದ ಕಾರ್ಯಗಳು ಜರುಗಿವೆ. ಆದ್ದ–ರಿಂದ ಶಾಸನೋಕ್ತ ಈ ವಾಕ್ಯವು ಅಮಂಗಳವಾದ ಶನಿವಾರದಲ್ಲೂ ಯಶಸ್ಸು ಕಂಡ ಹೊಯ್ಸಳ ರಾಜರು ಶನಿವಾರ ಸಿದ್ಧಿಯೆಂಬ ಬಿರುದನ್ನು ಧರಿಸಿದ್ದಾರೆ ಎಂಬ ಅಭಿಪ್ರಾಯವನ್ನು ಡಾ॥ ಗಣೇಶ್ ವ್ಯಕ್ತಪಡಿಸಿದರು.

ಕರ್ನಾಟಕ ಇತಿಹಾಸ ಅಕಾಡೆಮಿಯ ಅಧ್ಯಕ್ಷರಾದ ಡಾ॥ ದೇವರಕೊಂಡಾರೆಡ್ಡಿ, ಡಾ॥ ಸಾಸಲು ವಿಶ್ವನಾಥ್, ಡಾ॥ ಎಂ.ಜಿ.ನಾಗರಾಜ್, ಡಾ॥ ವಿ. ಸಂಧ್ಯಾ, ಡಾ॥ ನಳಿನಿ ವೆಂಕಟೇಶ್, ಶ್ರೀಮತಿ ಕೆ. ಭಾರತಿ ಮತ್ತು ಹಳಗನ್ನಡ ಕಾವ್ಯಾಭ್ಯಾಸದ ಕೆಲವು ವಿದ್ಯಾರ್ಥಿಗಳು ಭಾಗವಹಿಸಿ, ಚರ್ಚೆಯು ಅರ್ಥಪೂರ್ಣವಾಗಿ ನಡೆಯಿತು.

### ವಚನ ವಿಹಾರ

ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

18–05–2016 ರಂದು ಆಯೋಜಿಸಲಾಗಿದ್ದ ವಚನ ವಿಹಾರ ಕಾರ್ಯಕ್ರಮವನ್ನು ವಿದ್ಯುಚ್ಛಕ್ತಿ ವ್ಯತ್ಯಯದಿಂದ ರದ್ದುಪಡಿಸಲಾಯಿತು.

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

**ಒಲವು:** 'ಒಲ್' ಧಾತುವಿನಿಂದಲೇ ರೂಪತವಾಗಿರುವ ಮತ್ತೊಂದು ರೂಪ 'ಒಲವು' ('ಒಲ್+ವು). "ಪಲವುಂ ದಿವಸಕ್ಕೆ ಕಂಡು ಒಗದ ಒಲವಿಂ ಬಿಗಿಯಪ್ಪಿದಳ್ ಮಹಾಶ್ವೇತೆಯಂ" ಎಂಬ ಮಾತು 'ಕರ್ಣಾಟಕ ಕಾದಂಬರಿ'ಯದು.ಇಲ್ಲಿ ಸ್ನೇಹ ಎಂಬರ್ಥವಿದ್ದರೆ 'ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತಾದೆನಯ್ಯಾ" ಎಂಬ ಮಾತಿನಲ್ಲಿ ಗಂಡು–ಹೆಣ್ಣುಗಳ ನಡುವಣ ಅನುರಾಗ ಎಂದಾಗುತ್ತದೆ. ಅದೇ "ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ" ಎಂಬ ಬಸವಣ್ಣನದೇ ಮತ್ತೊಂದು ವಚನದ ಮಾತಿನಲ್ಲಿ ಈ ಶಬ್ದಕ್ಕೆ ಭಕ್ತಿ ಎಂಬರ್ಥ ಹೊಮ್ಮುತ್ತದೆ. ಒಲವು ಎಂದರೆ ಸಂತಸ ಎಂದೂ ಆಗಬಹುದು: "ಆತ್ಮಜೆಯನೊಲವಿಂದಿತ್ತು ಸಾಕ್ಷ್ಯಕ್ಕೆ ಕೈನೀರೆಱೆದಂ ಗಂಧರ್ವರಾಜಂ" – 'ಕರ್ಣಾಟಕ ಕಾದಂಬರಿ'. ಆಧುನಿಕ ಕವಿಗಳು ಸಾಮಾನ್ಯವಾಗಿ ಈ ಶಬ್ದವನ್ನು ಪ್ರಣಯಕ್ಕೆ ಅನ್ವಯಿಸಿ ಬಳಸುವುದುಂಟು. "ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು" ಎಂಬುದು ಬೇಂದ್ರೆಯವರ ಪ್ರಖ್ಯಾತ ಸಾಲು ('ಒಲವೆ ನಮ್ಮ ಬದುಕು' ಅವರ ಪ್ರೇಮಕವನಗಳ ಸಂಕಲನದ ಹೆಸರೂ ಹೌದು). "ನಾನು ಒಲವಿನ ಭಕ್ತ" ಎಂದು ಹೇಳಿಕೊಂಡವರು ಕೆಎಸ್‌ನ.

'ಒಲವರ' ಎಂಬ ಇನ್ನೊಂದು ರೂಪವೂ ಇದೆ.ಅದಕ್ಕೂ ಇವೇ ಅರ್ಥಗಳು. "ಮನದೊಲವರಮುಳ್ಳೊಡೆ ಕುಡು ಮನೆಯೊಳ್ ಹರಿಗಗ್ರಪೂಜೆಯಂ" ಎಂಬ 'ಪಂಪಭಾರತ'ದ ಮಾತಿನಲ್ಲಿ ಈ ಶಬ್ದಕ್ಕೆ ಭಕ್ತಿ, ಗೌರವ ಎಂಬರ್ಥವಿದ್ದರೆ, "ಏಕಿಕ್ಕಿದೆ ಬಲೆಯಂ ಪೇಟಣ್ಣ ನಿನಗೆ ಮಾಂಸದೊಳಾದೊಂದು ಒಲವರಮೆ" ಎಂಬ 'ಕರ್ಣಾಟಕ ಕಾದಂಬರಿ'ಯ ಮಾತಿನಲ್ಲಿ ಮೋಹ, ಆಸೆ ಎಂಬರ್ಥವಿದೆ. "ಒಲವರವಿಲ್ಲದ ಭಕ್ತಿ, ಲವಲವಿಕೆಯಿಲ್ಲದ ಪೂಜೆ" ಎಂಬ ಜೇಡರ ದಾಸಿಮಯ್ಯನ ವಚನವು ಈ ಶಬ್ದವನ್ನು ಪ್ರೀತಿ ಎಂಬರ್ಥದಲ್ಲಿ ಬಳಸುತ್ತದೆ. ಮನೋಧರ್ಮ ಎಂಬರ್ಥವೂ ಈ ಶಬ್ದಕ್ಕೆ ಬರುತ್ತದೆ: "ಮೃಗದೊಲವರಮುಮಂ ಅರಸನ ಬಗೆಯುಮಂ ಅಱಿದೋಲಗಿಸಲ್" – 'ಪಂಪಭಾರತ. "ಒಲವರವಲಾ ಮುರಹರಂಗೀ ಬಲದೊಳಗೆ" ಎಂಬ 'ಕುಮಾರವ್ಯಾಸಭಾರತ'ದ ಮಾತಿನಲ್ಲಿ ಈ ಶಬ್ದಕ್ಕೆ ಪಕ್ಷಪಾತ ಎಂಬರ್ಥ ಹೊಮ್ಮುತ್ತದೆ.'ಒಲವರಂಗೊಳ್' ಎಂದರೆ ಪಕ್ಷಪಾತ ("ಒಲವರಂಗೊಳ್–ಪಕ್ಷಸ್ವೀಕಾರೇ" – 'ಶಬ್ದಮಣಿದರ್ಪಣ'). 'ಒಲವರಂಬಡು' ಎಂದರೆ ಮೆಚ್ಚುಗೆಹೊಂದು ಎಂದರ್ಥ: "ತನ್ನ ನಱುಜವ್ವನದ ಪರಿಯ ಮುಂಗಾಣ್ಕೆಗುಡಲ್ ಬಿನ್ನಣದೊಳೊಲವರಂಬಡದೆ" ಎಂಬುದು ಸೋಮದೇವನ 'ಉದ್ಭಟಕಾವ್ಯ'ದ ಸಾಲು. 'ಒಲವರವಾನ್' ಎಂದರೂ ಇದೇ ಅರ್ಥ: "ಮಿಂದೊಲವಾಂತು ದಣಿಬವನುಟ್ಟು ಭಸಿತವನಿಟ್ಟು ಭಾಳದಲಿ" ಎಂಬುದು 'ಬಸವಪುರಾಣ'ದ ಮಾತು.

**ಒಲುಮೆ:** ಇದು ಒಲ್ ಎಂಬ ಧಾತುವಿನಿಂದ ಬಂದಿದೆ. ಒಲ್ ಎಂದರೆ ಪ್ರೀತಿಸು, ಮೋಹಗೊಳ್ಳು ಎಂದರ್ಥ: "ಸುಯೋಧನನ ರಾಜ್ಯಮಂ ಒಲ್ವೊಡಂ ಶಲ್ಯನನೆ ಸಾರಥಿಮಾಡಿ ಕಾದುವುದು" ಎಂಬುದು 'ಪಂಪಭಾರತ'ದ ಪ್ರಯೋಗ. ಇದಕ್ಕೆ 'ಮೆ' ಎಂಬ ಪ್ರತ್ಯಯ ಸೇರಿ 'ಪ್ರೀತಿ' ಎಂಬರ್ಥದ ನಾಮಪದವಾಗಿದೆ."ಸೊಬಗಂ ಒಲ್ಮೆಯುಂ ಧೈರ್ಯಮಂ" ಎಂಬುದು 'ವಡ್ಡಾರಾಧನೆ'ಯಲ್ಲಿನ ಮಾತು.ಪ್ರೀತಿಸುವವನು ಎಂಬರ್ಥದಲ್ಲಿ ಇದು 'ಒಲ್ಮೆಗ' ಎಂದೂ ಆಗುತ್ತದೆ: "ನನ್ನಿಗರ ಇಂಪುಗಾಱರ್ ಇನಿವಾತುಗರ್ ಇಚ್ಚೆಗಾರರಾರ್ಪರ್ ಒಲ್ಮೆಗರ್ ಚೆನ್ನಿಗರ್" ಎಂಬ ಮಾತು ತಿರುಮಲಾರ್ಯನ 'ಚಿಕದೇವರಾಜವಿಜಯ'ದ್ದು. ಒಲ್ ಎಂಬ ಧಾತುವು 'ಒಲಿ' ಎಂಬ ರೂಪದಲ್ಲಿಯೂ ಇದೆ: "ಕುಲನಿಂತು ಪಿಕ್ಕದಿರಿಂ ನೀಂ ಒಲಿದಲ್ಲಿ ಪುಟ್ಟಿ ಬಳೆದಿರೋ ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ" ಎಂಬ ಹರಿತವಾದ ಕರ್ಣನ ಮಾತು 'ಪಂಪಭಾರತ'ದ್ದು. 'ಒಲ್ಮೆ' ಎಂದರೆ ಅನುಗ್ರಹ ಅಥವಾ ಕೃಪೆ ಎಂಬರ್ಥವೂ ಆಗುತ್ತದೆ: "ದೈವದೊಲ್ಮೆಯಿರಲಾ ಕಾಲಾನುಕಾಲಕ್ಕೆ ಬಡವಂ ಬಲ್ಲಿದನಾಗನೇ" ಎಂಬುದು 'ಸೋಮೇಶ್ವರಶತಕ'ದಲ್ಲಿ ಬರುವ ನುಡಿ. "ಒಲುಮೆಯ ಕೂಟಕ್ಕೆ ಹಾಸಿನ ಹಂಗೇಕೆ" ಎಂಬುದು ಅಲ್ಲಮ ವಚನದ ಸಾಲು. ಒಲುಮೆ ಎಂದೂ ಪ್ರೀತಿ."ಒಲುಮೆ ಒಲಿದೇ ಒಲಿವುದು" ಎಂಬುದು ಕೆಎಸ್‌ನ ಅವರ ಒಂದು ಕವನದ ಶೀರ್ಷಿಕೆ.ಈ ವಾಕ್ಯದಲ್ಲಿಯೇ 'ಒಲುಮೆ' ಇದೆ.ಇದು ವ್ಯಾಪಕವಾಗಿ ಬಳಕೆಯಾಗುವ ಪದ."ಅಂಗಮಾಸಿದಲ್ಲಿ ಜಲದೊಲುಮೆ; ಮನ ಮರೆದಲ್ಲಿ ಅರಿವಿನೊಲುಮೆ" ಎಂಬುದು ಕೋಲಶಾಂತಯ್ಯನೆಂಬ ವಚನಕಾರನ ಸೂತ್ರವಾಕ್ಯ. ಹರಿಹರನ 'ಬಸವರಾಜದೇವರರಗಳೆ'ಯಲ್ಲಿ "ಶರಣರೊಡನೊಲುಮೆಯಿಂ ಲಿಂಗಾರ್ಚನಂಗೆಯ್ದು" ಎಂಬ ಮಾತಿದೆ. ತೀನಂಶ್ರೀ ಅವರ 'ಒಲುಮೆ' ಎಂಬ ಹೆಸರಿನ ಪ್ರೇಮಕವನ ಸಂಕಲನವೇ ಇದೆ (ಇದು ಮೊಟ್ಟ ಮೊದಲ ಆಧುನಿಕ ಪ್ರೇಮಕವನ ಸಂಕಲನ).

ಒಲ್ಮೆ ಹಾಗೂ ಒಲುಮೆಗಳಿಂದ ಅನೇಕ ಸಮಾಸಗಳು ಸೃಷ್ಟಿಯಾಗುತ್ತವೆ. 'ಒಲ್ಮೆವೆಱು' ಎಂದರೆ ಪ್ರೀತಿ ಹೊಂದು ಎಂದರ್ಥ: "ಶಿವಾಕ್ಷಿಮಣಿಪ್ರತಾನಮಂ ಧರಿಸುತ್ತಂಗದೊಳೊಲ್ಮೆವೆತ್ತು ಶಿವಮಂತ್ರಧ್ಯಾನಯಕ್ತನಾದಂ" ಎಂಬ ವಾಕ್ಯ 'ವೃಷಭೇಂದ್ರವಿಜಯ'ದ್ದು. 'ಒಲುಮೆದೋಱು' ಎಂದರೆ ಪ್ರೀತಿ ತೀರಿಸು: "ಹುಸಿಯೊಲುಮೆದೋಱುವರಾ ಪರಿಯಲಿ ಹೃದಯಗೊಡರನೃತವನಾಡುವರು" – ಚೌಂಡರಸನ 'ನಳಚಂಪು'. ಮೂರನೆಯ ಮಂಗರಸನ 'ನೇಮಿಜಿನೇಶ ಸಂಗತಿ'ಯಲ್ಲಿ 'ಒಲುಮೆಮದ್ದು' ಎಂದರೆ 'ವಶೀಕರಣದ ಮದ್ದು': "ಓಪನವಳ ಕೈವಶವಾಗಲದಕೆ ಅವಳಾತಗೊಲುಮೆಮದ್ದನು ತಿನಿಸಿದಳೆಂದು ತಮತಮಗೆಲ್ಲರಾಡವರು." ಕೆಎಸ್‌ನ "ನಿನ್ನೊಲುಮೆ ತಾರೆಗಳ ಹರಡಿರುವ ಬಾನು" ಎಂಬ ಸಾಲಿನಲ್ಲಿ 'ಒಲುಮೆತಾರೆ' ಪದವನ್ನು ಸೃಷ್ಟಿಸಿಕೊಳ್ಳುತ್ತಾರೆ.

ಕಡಲೆ: ಇದು ತಮಿಳಿನಲ್ಲಿ ಕಡಲೈ ಎಂದೂ, ತುಳುವಿನಲ್ಲಿ ಕಡಲೆ ಎಂದೂ, ಮಲಯಾಳಂನಲ್ಲಿ ಕಡಲ ಎಂದು ಬಳಕೆಯಲ್ಲಿರುವ ಪದ. ಕನ್ನಡ ನಾಡಿನಲ್ಲಿ ಮೊದಲಿದ್ದದ್ದು ಕಡಲೆ ಎಂಬ ದ್ವಿದಳ ಧಾನ್ಯ. ಇದರ ಉಲ್ಲೇಖ 'ಪಂಪಭಾರತ'ದಲ್ಲಿಯೇ ಇದೆ: ("ಮೆಳಸುಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯ ಚಿಕ್ಕಣಂಗಳಂ ಸವಿಸವಿದು"). ಇಲ್ಲಿ ಹೇಳಿರುವುದು ಹೆಂಡಕುಡುಕರು ನಂಜಿಕೊಳ್ಳುತ್ತಿದ್ದ ಕಾರ ಹಚ್ಚಿದ ಕಡಲೆಯನ್ನು ಕುರಿತು. ಪೊನ್ನನ 'ಶಾಂತಿಪುರಾಣ'ದಲ್ಲಿ ಹುರಿಗಡಲೆಯ ಪ್ರಸ್ತಾಪವಿದೆ. ಹಾಗೆಯೇ ನಯಸೇನನ 'ಧರ್ಮಾಮೃತ'ದಲ್ಲಿ "ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ" ಎಂಬ ಗಾದೆ ಮಾತು ಕಾಣಸಿಗುತ್ತದೆ. ಅಂದರೆ ಬಾಯಿರುಚಿಗಾಗಿ ಕಡಲೆಯನ್ನು ವ್ಯಾಪಕವಾಗಿ ಬಳಸುತ್ತಿದ್ದರೆಂಬುದು ಈ ಉಲ್ಲೇಖಗಳಿಂದ ತಿಳಿಯಬಹುದು. ಇದನ್ನು ಈಗ ಸೊಪ್ಪಿನ ಕಡಲೆ ಎಂದೂ ಕರೆಯುವ ರೂಢಿ ಇದೆ.

ಸೊಪ್ಪಿನ ಕಡಲೆಯು ಗಿಡದಲ್ಲಿ ಎಲೆಗಳ ನಡುವೆ ಬಿಡುವಂಥದು, ಎಣ್ಣೆಯ ಅಂಶ ಇಲ್ಲದಂಥದ್ದು, ಹಾಗೂ ಮೃದುವಾದ ಸಿಪ್ಪೆಯಲ್ಲಿ ಅಡಗಿರುವಂಥದು. ಈಚೆಗೆ, ಅಂದರೆ ಹದಿನಾರನೆಯ ಶತಮಾನದ ಎರಡನೆಯ ಅರ್ಧದ ಬಳಿಕ ನಮ್ಮಲ್ಲಿ ಮತ್ತೊಂದು ಬಗೆಯ ಕಡಲೆ ಬಳಕೆಯಲ್ಲಿ ಬಂದಿದೆ. ಅದು ನೆಲದೊಳಗೆ ಬೇರಿನಲ್ಲಿ ಬಿಡುವಂಥದು, ಎಣ್ಣೆಯ ಅಂಶ ಹೆಚ್ಚು ಇರುವಂಥದು ಹಾಗೂ ಸ್ವಲ್ಪ ಗಟ್ಟಿ ಸಿಪ್ಪೆಯನ್ನು ಹೊಂದಿರುವಂಥದು. ಈ ಸಸ್ಯವನ್ನು ಕಡಲೆಯ ಮತ್ತೊಂದು ರೀತಿ ಎಂದು ಭಾವಿಸಿ ಇದನ್ನು ನೆಲಗಡಲೆ ಎನ್ನುವ ವಾಡಿಕೆ ಬಂತು; ತಮಿಳಿನಲ್ಲಿ ಇದನ್ನು ನೆಲಕಡಲೈ ಎಂದೂ, ತೆಲುಗಿನಲ್ಲಿ ನೆಲಶನಿಗ ಅಥವಾ ವೇರುಶನಿಗ [ವೇರು=ಬೇರು] ಎಂದೂ ಕರೆಯುವ ರೂಢಿಯಿದೆ. ಇದು 7600 ವರ್ಷಗಳಷ್ಟು ಹಿಂದೆಯೇ ಬೆಳೆಯುತ್ತಿತ್ತು ಎಂದು ಪ್ರಾಚ್ಯಶಾಸ್ತ್ರಜ್ಞರು ಹೇಳುತ್ತಾರೆ. ಈ ಸಸ್ಯದ ಮೂಲಸ್ಥಾನದ ಬಗ್ಗೆ ಭಿನ್ನಾಭಿಪ್ರಾಯಗಳಿವೆ: ಪೆರು, ಅಥವಾ ಘಾನಾ, ಕ್ಯೂಬ ಎಂಬುದು ವಿವಿಧ ವಿದ್ವಾಂಸರ ಅಭಿಪ್ರಾಯ. ತೆಲುಗಿನಲ್ಲಿ ಇದನ್ನು ಶನಿಗಕಾಯ ಅಥವಾ ಶನಿಕ್ಕಾಯ ಎನ್ನುತ್ತಾರೆ. ಇದಕ್ಕೆ ಸಮೀಪವಾಗಿರುವ ಸೇಂಗ[ಗಾ] ಅಥವಾ ಶೇಂಗ[ಗಾ] ಎಂಬ ಶಬ್ದವು ಉತ್ತರ ಕರ್ನಾಟಕ ಭಾಗದಲ್ಲಿ ಹೆಚ್ಚಿಗೆ ಬಳಕೆಯಲ್ಲಿದೆ. ದಕ್ಷಿಣ ಕರ್ಣಾಟಕದಲ್ಲಿ ಇದನ್ನು ಕಡಲೆಕಾಯಿ ಎನ್ನುತ್ತಾರೆ.

**"ಮೆಮೊರಿಸ್ ಆಫ್ ಟೈಗರ್– ಹಂಟಿಂಗ್ ವೀರಪ್ಪನ್"**

ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಬಿ. ಆರ್. ರವೀಂದ್ರನಾಥ್ ಅವರು ಅನುವಾದಿಸಿರುವ ಇಂಗ್ಲೀಷ್ "ಮೆಮೊರಿಸ್ ಆಫ್ ಟೈಗರ್– ಹಂಟಿಂಗ್ ವೀರಪ್ಪನ್" ಪುಸ್ತಕ ಬಿಡುಗಡೆಗೊಂಡಿರುತ್ತದೆ. (ನರಹಂತಕ ವೀರಪ್ಪನ್ ಕಾರ್ಯಾಚರಣೆ ಕುರಿತಾದ "ಹುಲಿಯ ನೆನಪುಗಳು" ಕನ್ನಡ ಪುಸ್ತಕದ ಮೂಲ ಲೇಖಕ: ಶ್ರೀ ಬಿಬಿ ಅಶೋಕಕುಮಾರ್)

# ಗ್ರಂಥಾಲಯ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಗ್ರಂಥಾಲಯ 1979 ರಲ್ಲಿ ಸ್ಥಾಪನೆಯಾಯಿತು.

ಸ್ಥಾಪನಾ ವರ್ಷದಿಂದಲೇ ಶ್ರೀಯುತ ಎಂ.ವಿ.ಸೀ. ಯವರು ತಮ್ಮದೇ ಪುಸ್ತಕ ಸಂಗ್ರಹವನ್ನು ಮೂಲ ದ್ರವ್ಯವಾಗಿ ಬಳಸಿ ಈ ಸಂಸ್ಥೆಯ ಗ್ರಂಥಾಲಯವನ್ನು ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೆ ಶೇಖರಣೆಯಾದ ಒಟ್ಟು ಗ್ರಂಥಗಳ ಸಂಖ್ಯೆ 26000 ಹಾಗೂ ನಿಯತಕಾಲಿಕೆಗಳ ಸಂಖ್ಯೆ 7100. ಜೊತೆಗೆ ನಮ್ಮ ಗ್ರಂಥಾಲಯದಲ್ಲಿ ಲಭ್ಯವಿರುವ ದೇಶದ ಹಾಗೂ ಕರ್ನಾಟಕದ ಗೌರವಾನ್ವಿತ ಮಹನೀಯರ ಅಭಿನಂದನಾ ಗ್ರಂಥಗಳ ಸಂಖ್ಯೆ 481 ಆಗಿದ್ದು ಇವುಗಳು ಉತ್ತಮ ಆಕರ ಗ್ರಂಥಗಳ ರೂಪದಲ್ಲಿ ಉಪಯುಕ್ತವಾಗಿವೆ.

ಈ ಅಮೂಲ್ಯವಾದ ಗ್ರಂಥಗಳನ್ನು ವೈಜ್ಞಾನಿಕವಾಗಿ ವಿಂಗಡಿಸಿ ಜೋಡಿಸಲಾಗಿದೆ.ಹಾಗೂ ಎಲ್ಲ ಪುಸ್ತಕಗಳ ಮಾಹಿತಿಯನ್ನು ಗಣಕಯಂತ್ರದಲ್ಲಿ ದಾಖಲಿಸಲಾಗಿದೆ.ಹೀಗಾಗಿ ಲಭ್ಯವಿರುವ ಪುಸ್ತಕವನ್ನು ಸುಲಭವಾಗಿ ಹುಡುಕಬಹುದು. ಓದುಗರಿಗೆ ಸಹಾಯವಾಗುವದಕ್ಕಾಗಿ ಎಲ್ಲ ಕಪಾಟುಗಳ ಮೇಲೆ ವಿವರಣಾ ಪಟ್ಟಿಯನ್ನು ಲಗತ್ತಿಸಲಾಗಿದೆ.

ಈ ಅಮೂಲ್ಯ ಹಾಗೂ ಅಪರೂಪವಾದ ಪುಸ್ತಕ ಸಂಗ್ರಹದ ಪ್ರಯೋಜನವನ್ನು ಪ್ರತಿಷ್ಠಾನದ ಸದಸ್ಯರು ಪಡೆಯಬೇಕಾಗಿ ಕೋರಲಾಗಿದೆ.

## ಬಿ.ಎಂ.ಶ್ರೀ ಪ್ರತಿಷ್ಠಾನದ ಪ್ರಕಟಣೆಗಳು ಹಾಗೂ ಮಾರಾಟಕ್ಕೆ ಲಭ್ಯವಿರುವ ಪುಸ್ತಕಗಳ ಪಟ್ಟಿ

1 ಸೂತ ಭಾರತ
2 ಚಂದ್ರಚೂಡಾಮಣಿ ಶತಕ
3 ಶ್ರೀನಿವಾಸ ಕಲ್ಯಾಣ
4 ಪದ್ಮಿನೀ ಕಲ್ಯಾಣ
5 ಕುಂತಿಯ ಅಂತರಾಳ (ಕಾದಂಬರಿ)
6 ಸುದ್ದಿ ಸಂಕಮ್ಮ
7 ಬರಡು ಬರಹಗಳು
8 ಕಾವ್ಯದ ಒಂದು ಚುಂಗನ್ನು ಹಿಡಿದು
9 ಧ್ರುವ ಚರಿತ್ರೆ
10 ಬೇಟೆರಾಯ ದೀಕ್ಷಿತರ ದೇವರ ನಾಮಗಳು
11 ತಿಮ್ಮಪ್ಪದಾಸರ ಕೀರ್ತನೆಗಳು
12 ಆಯ್ದ ಕವನಗಳು
13 ಕನ್ನಢ ಕಂಡ ಎಂ.ಆರ್.ಶ್ರೀ
14 ಎಂ.ವಿ.ಸೀ ನುಡಿಮುತ್ತುಗಳು
15 ಹಸ್ತಪ್ರತಿ ಅಧ್ಯಯನ ಶಾಸ್ತ್ರ
16 ಮಕ್ಕಳ ಎಂ.ವಿ.ಸೀ
17 ನವ್ಯ ಸ್ಫೂರ್ತಿ
18 ಸೃಜನ ಶೀಲತೆ ಮತ್ತು ಪಾಂಡಿತ್ಯ
19 ಕದಂಬ
20 ಬಿ.ಎಂ.ಶ್ರೀ ವ್ಯಕ್ತಿ ಪರಿಚಯ ಮತ್ತು ಸೂಕ್ತಿಗಳು
21 ಕು.ವೆಂ.ರಾಘವಾಚಾರ್ – ಜೀವನ ಸಾದನೆ
22 ಬಿ.ಎಂ.ಶ್ರೀಕಂಠಯ್ಯ – ಜೀವನ ಸಾಧನೆ
23 ಕನ್ನಡ ಸಾಹಿತ್ಯದಲ್ಲಿ ವಿಶಿಷ್ಠಾದ್ವೈತ
24 ಕಾವ್ಯ ಶಾಸ್ತ್ರ ವಿನೋದ
25 ಕಾವ್ಯಾಲಾಪ
26 ಪರಶುರಾಮ
27 ಈಸಬೇಕು
28 ಉದಯೋದ್ಯಾನ
29 ಬೆಟಗೇರಿ ಕೃಷ್ಣ ಶರ್ಮ – ಜೀವನ ಪರಿಚಯ
30 ಪ್ರೊ.ಡಿ.ಲಿಂಗಯ್ಯ – ಜೀವನ ಮತ್ತು ಸಾಹಿತ್ಯ ಸಾಧನೆ
31 ಪರಿಹಾರ ಮತ್ತು ಇತರ ಕಥೆಗಳು
32 ತಿರುಕಿಯ ಕನಸು
33 ಸಾಹಿತ್ಯ ಮತ್ತು ಸತ್ಯ
34 ಕನ್ನಡವೆಂಬ ಕನ್ನಡಿ
35 ಕವಿಗಳು ಕಂಡ ಬಿ.ಎಂ.ಶ್ರೀ
36 ಕನ್ನಡ ಮಾತು ತಲೆ ಎತ್ತುವ ಬಗೆ
37 ಪ್ರಾಚೀನ ಕನ್ನಡ ಕಾವ್ಯ ಸಂಗ್ರಹ
38 ಇಲ್ಲಿಂದೆಲ್ಲಿಗೆ
39 ಧೀಮಂತ ಮಹಿಳೆ
40 BMS the man & his missions
41 ಇಂಗ್ಲೀಷ ಗೀತೆಗಳು
42 Early vijaynagar

# ಪುಂಡಲೀಕ ಹಾಲಂಬಿಯವರಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ನುಡಿನಮನ



ನಾಡು–ನುಡಿಯ ಸೇವೆಗಾಗಿ ತಮ್ಮನ್ನು ತೊಡಗಿಸಿಕೊಂಡ ಹಾಲಾಡಿ ಪುಂಡಲೀಕ ಹಾಲಂಬಿಯವರು ದಿನಾಂಕ 25–04–2016ರಂದು ವಿಧಿವಶರಾದರು. ಪರಿಷತ್ತಿನಲ್ಲಿ ಕೋಶಾಧ್ಯಕ್ಷರಾಗಿ 15 ವರ್ಷಗಳ ಕಾಲ ಸೇವೆ ಸಲ್ಲಿಸಿದ ಹಾಲಂಬಿಯವರು, ಪರಿಷತ್ತಿನ ಅಧ್ಯಕ್ಷರಾಗಿ ಅಭೂತಪೂರ್ವ ಸೇವೆ ಸಲ್ಲಿಸಿದರು. ಪರಿಷತ್ತಿನ ಶತಮಾನೋತ್ಸವವನ್ನು ಇಡೀ ವರ್ಷ ಬಹಳ ಅರ್ಥಪೂರ್ಣವಾಗಿ ಆಚರಿಸಿದ ಹಿರಿಮೆ ಅವರದು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಆಡಳಿತ ವರ್ಗ ಮತ್ತು ಸದಸ್ಯರೆಲ್ಲರೂ ಹಾಲಂಬಿಯವರಿಗೆ, ಈ ಮೂಲಕ ಭಾವ ಪೂರ್ವಕ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತದೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of Posting :30-05-2016

## 2016 ಮೇ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷಣಾಕಾರ್ಯವು ನಡೆಯುತ್ತಿದೆ. 2016ರ ಮೇ ತಿಂಗಳಿನಲ್ಲಿ 8 ಗ್ರಂಥಗಳ ಶುಷ್ಕ ಶುದ್ಧೀಕರಣ, 6 ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, 21 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, 6 ಗ್ರಂಥಗಳಿಗೆ ಅಟ್ಟೆಕಟ್ಟುವ ಕಾರ್ಯ, ಹಾಗೂ 21 ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ.

ಹಸ್ತಪ್ರತಿ ವಿಭಾಗವು ಹೊರಗಿನಿಂದ ಬಂದ ಒಂದು ಹಳಗನ್ನಡ ಗದ್ಯದ ಲಿಪಿಯಾಂತರದ ಕಾರ್ಯವು ಮುಕ್ತಾಯದ ಹಂತದಲ್ಲಿದೆ.

## ಶಾಶ್ವತ ನಿಧಿ : ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟಲೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ, ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದು ಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ. ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ. ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..............................................................................

..............................................................................

..............................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭